# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1243 |
| ಸದಸ್ಯರ ಹೆಸರು | ಶ್ರೀ ಎಸ್.ರವಿ<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 22.09.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ನೂತನವಾಗಿ ಘೋಷಣೆ ಯಾಗಿರುವ ತಾಲ್ಲೂಕುಗಳ ಸಂಖ್ಯೆ ಎಷ್ಟು (ವಿವರ ನೀಡುವುದು ) | ರಾಜ್ಯದಲ್ಲಿ 2017-18ನೇ ಸಾಲಿನಿಂದ ಇದುವರೆಗೆ ಒಟ್ಟು 64 ಹೊಸ ತಾಲ್ಲೂಕುಗಳನ್ನು ಘೋಷಿಸಲಾಗಿದೆ. ಈ ಪೈಕಿ 57 ತಾಲ್ಲೂಕುಗಳು ಅಧಿಕೃತವಾಗಿ ಅಸ್ತಿತ್ವಕ್ಕೆ ಬಂದಿದ್ದು, ಇನ್ನುಳಿದ 7 ತಾಲ್ಲೂಕುಗಳಿಗೆ ಗ್ರಾಮಗಳನ್ನು ಸೇರ್ಪಡೆ ಮಾಡಿ ಅಧಿಸೂಚಿಸುವ ಪ್ರಕ್ರಿಯೆ ಚಾಲನೆಯಲ್ಲಿದೆ. ಹೊಸ ತಾಲ್ಲೂಕುಗಳ ವಿವರಗಳನ್ನು **ಅನುಬಂಧದಲ್ಲಿ** ಲಗತ್ತಿಸಿದೆ. |
| ಆ) | ಸದರಿ ತಾಲ್ಲೂಕುಗಳಿಗೆ ಅಧಿಕಾರಿ/ ಸಿಬ್ಬಂದಿಗಳನ್ನು ನೇಮಕ ಮಾಡಲಾಗಿ ದೆಯೇ; | ರಾಜ್ಯದಲ್ಲಿ ಹೊಸದಾಗಿ ರಚನೆಯಾಗಿರುವ 57 ತಾಲ್ಲೂಕುಗಳ ಪೈಕಿ 54 ತಾಲ್ಲೂಕುಗಳಿಗೆ ಕಂದಾಯ ಇಲಾಖೆ ವತಿಯಿಂದ ತಾಲ್ಲೂಕು ಕಚೇರಿಯನ್ನು ಪ್ರಾರಂಭಿಸಲು ಅಗತ್ಯವಿರುವ ಹುದ್ದೆಗಳನ್ನು ಸೃಜಿಸಲಾಗಿದೆ. 50 ಕ್ಕಿಂತ ಹೆಚ್ಚಿಗೆ ಗ್ರಾಮಗಳಿರುವ ತಾಲ್ಲೂಕುಗಳಲ್ಲಿ ತಹಸೀಲ್ದಾರ್ ಹುದ್ದೆ ಸೇರಿದಂತೆ 17 ಹುದ್ದೆಗಳನ್ನು ಹಾಗೂ 50 ಗ್ರಾಮಗಳಿಗಿಂತ ಕಡಿಮೆ ಗ್ರಾಮಗಳಿರುವ ತಾಲ್ಲೂಕುಗಳಿಗೆ 12 ಹುದ್ದೆಗಳನ್ನು ಸೃಜಿಸಲಾಗಿದೆ. ಇತ್ತೀಚೆಗೆ ಅಸ್ತಿತ್ವಕ್ಕೆ ಬಂದಿರುವ ಮುಲ್ಕಿ, ಸಾಲಿಗ್ರಾಮ ಹಾಗೂ ಕಳಸ ತಾಲ್ಲೂಕುಗಳಲ್ಲಿ ತಾಲ್ಲೂಕು ಕಚೇರಿಯನ್ನು ಪ್ರಾರಂಭಿಸಲು ಅನುವಾಗುವಂತೆ ಹುದ್ದೆಗಳನ್ನು ಸೃಜಿಸಲು ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿದೆ. |
| ಇ) | ಇಲ್ಲದಿದ್ದಲ್ಲಿ, ನೇಮಕಾತಿಗೆ ಯಾವ ಕ್ರಮ ಕೈಗೊಳ್ಳಲಾಗಿದೆ ? | ರಾಜ್ಯದಲ್ಲಿ ರಚನೆಯಾಗಿರುವ ಹೊಸ ತಾಲ್ಲೂಕುಗಳಲ್ಲಿ ಮೊದಲಿಗೆ ಕಂದಾಯ ಇಲಾಖೆಯಿಂದ ತಾಲ್ಲೂಕು ಕಚೇರಿಗಳನ್ನು ಪ್ರಾರಂಭಿಸಲಾಗಿದೆ. ಇನ್ನುಳಿದ ಪ್ರಮುಖ ಇಲಾಖೆಗಳ ತಾಲ್ಲೂಕು ಮಟ್ಟದ ಕಚೇರಿಗಳನ್ನು ಪ್ರಾರಂಭಿಸಲು ಸಂಬಂಧಪಟ್ಟ ಸಚಿವಾಲಯದ ಇಲಾಖೆಗಳ ಮುಖ್ಯಸ್ಥರೊಂದಿಗೆ ಈ ಹಿಂದೆ ಸಭೆ ನಡೆಸಿ ತಾಲ್ಲೂಕು ಮಟ್ಟದ ಕಚೇರಿ ಪ್ರಾರಂಭಿಸಲು ಹಾಗೂ ಹುದ್ದೆಗಳನ್ನು ಸೃಜಿಸಲು ಕ್ರಮ ಕೈಗೊಳ್ಳುವಂತೆ ನಿರ್ದೇಶನ ನೀಡಲಾಗಿದೆ. ಜೊತೆಗೆ, ಇತ್ತೀಚೆಗೆ ದಿನಾಂಕ:15-09-2021 ರಂದು ಸಚಿವಾಲಯದ ಎಲ್ಲಾ ಇಲಾಖೆಗಳ ಸರ್ಕಾರದ ಅಪರ ಮುಖ್ಯ/ ಪ್ರಧಾನ/ ಕಾರ್ಯದರ್ಶಿಗಳಿಗೆ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರಿಂದ ಅರೆ ಸರ್ಕಾರಿ ಪತ್ರ ಬರೆದು, ಹೊಸ ತಾಲ್ಲೂಕುಗಳಲ್ಲಿ ತಾಲ್ಲೂಕು ಮಟ್ಟದ ಕಚೇರಿಗಳನ್ನು ಆರ್ಥಿಕ ಇಲಾಖೆಯ ಸಹಮತಿ ಪಡೆದು ಪ್ರಾರಂಭಿಸಲು ಅಗತ್ಯ ಕ್ರಮ ಕೈಗೊಳ್ಳುವಂತೆ ತಿಳಿಸಲಾಗಿದೆ. ಅದೇ ರೀತಿ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಸಹ ಈ ಬಗ್ಗೆ ಸೂಕ್ತ ನಿರ್ದೇಶನ ನೀಡಲಾಗಿರುತ್ತದೆ |

| | | |
|---|---|---|
| ಈ) | ನೂತನವಾಗಿ ರಚನೆಯಾದ ತಾಲ್ಲೂಕು ಗಳಿಗೆ ಕಾರ್ಯ ನಿರ್ವಹಿಸಲು ಸ್ವಂತ ಕಟ್ಟಡಗಳಿವೆಯೇ; ಇಲ್ಲದಿದ್ದಲ್ಲಿ, ನೂತನ ಕಟ್ಟಡಕ್ಕಾಗಿ ಸರ್ಕಾರ ಕೈಗೊಂಡ ಕ್ರಮಗಳೇನು? | ರಾಜ್ಯದಲ್ಲಿ ಹೊಸದಾಗಿ ರಚನೆಯಾದ ತಾಲ್ಲೂಕುಗಳಲ್ಲಿ ಸ್ವಂತ ಕಟ್ಟಡಗಳಿಲ್ಲದಿರುವ ಕಡೆ ಸರ್ಕಾರಿ ಜಮೀನು ಗುರುತಿಸಿ, ಎಲ್ಲಾ ಮೂಲಭೂತ ಸೌಕರ್ಯಗಳನ್ನು ಒಳಗೊಂಡಂತೆ ಮಿನಿ ವಿಧಾನ ಸೌಧ ನಿರ್ಮಿಸಲು ಪ್ರಸ್ತಾವನೆ ಸಲ್ಲಿಸುವಂತೆ ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ. |

**<u>ಸಂಖ್ಯೆ: ಕಂಇ 86 ಎಲ್‌ಆರ್‌ಡಿ 2021</u>**

(ಆರ್.ಅಶೋಕ)
ಕಂದಾಯ ಸಚಿವರು

Q.No. 1243

ಅನುಬಂಧ

**2017–18ನೇ ಸಾಲಿನಿಂದ ಇದುವರೆಗೆ ಅಸ್ತಿತ್ವಕ್ಕೆ ಬಂದಿರುವ ತಾಲ್ಲೂಕುಗಳ ವಿವರ**

| ವಿಭಾಗ | ಜಿಲ್ಲೆ | | ಹೊಸ ತಾಲ್ಲೂಕಿನ ಹೆಸರು | |
|---|---|---|---|---|
| ಬೆಂಗಳೂರು | 1. | ಬೆಂಗಳೂರು ನಗರ | 1. | ಯಲಹಂಕ |
| | 2. | ಕೋಲಾರ | 2. | ಕೆ.ಜಿ.ಎಫ್. |
| | 3. | ದಾವಣಗೆರೆ | 3. | ನ್ಯಾಮತಿ |
| ಮೈಸೂರು | 4. | ದಕ್ಷಿಣ ಕನ್ನಡ | 4. | ಮೂಡುಬಿದರೆ |
| | | | 5. | ಕಡಬ |
| | | | 6. | **ಉಳ್ಳಾಲ*** |
| | | | 7. | **ಮುಲ್ಕಿ*** |
| | 5. | ಮೈಸೂರು | 8. | ಸರಗೂರು |
| | | | 9. | **ಸಾಲಿಗ್ರಾಮ*** |
| | 6. | ಚಿಕ್ಕಮಗಳೂರು | 10. | ಅಜ್ಜಂಪುರ |
| | | | 11. | **ಕಳಸಾ*** |
| | 7. | ಚಾಮರಾಜನಗರ | 12. | ಹನೂರು |
| | 8. | ಉಡುಪಿ | 13. | ಬ್ರಹ್ಮಾವರ |
| | | | 14. | ಕಾಪು |
| | | | 15. | ಬೈಂದೂರು |
| | | | 16. | ಹೆಬ್ರಿ |
| | 9. | ಕೊಡಗು | 17. | **ಪೊನ್ನಂಪೇಟೆ*** |
| | | | 18. | **ಕುಶಾಲನಗರ*** |
| ಬೆಳಗಾವಿ | 10. | ಬೆಳಗಾವಿ | 19. | ನಿಪ್ಪಾಣಿ |
| | | | 20. | ಮೂಡಲಗಿ |
| | | | 21. | ಕಾಗವಾಡ |
| | 11. | ಬಾಗಲಕೋಟೆ | 22. | ಗುಳೇದಗುಡ್ಡ |
| | | | 23. | ರಬಕವಿ – ಬನಹಟ್ಟಿ |
| | | | 24. | ಇಳಕಲ್ |
| | 12. | ಧಾರವಾಡ | 25. | ಅಣ್ಣಿಗೇರಿ |
| | | | 26. | ಅಳ್ನಾವರ |
| | | | 27. | ಹುಬ್ಬಳ್ಳಿ ನಗರ |
| | 13. | ಗದಗ | 28. | ಗಜೇಂದ್ರಗಡ |
| | | | 29. | ಲಕ್ಷ್ಮೇಶ್ವರ |
| | 14. | ಹಾವೇರಿ | 30. | ರಟ್ಟಿಹಳ್ಳಿ |
| | 15. | ಉತ್ತರ ಕನ್ನಡ | 31. | ದಾಂಡೇಲಿ |
| | 16. | ವಿಜಯಪುರ | 32. | ಬಬಲೇಶ್ವರ |
| | | | 33. | ನಿಡಗುಂದಿ |
| | | | 34. | ತಿಕೋಟ |
| | | | 35. | ದೇವರಹಿಪ್ಪರಗಿ |
| | | | 36. | ತಾಳಿಕೋಟೆ |
| | | | 37. | ಚಡಚಣ |

| | | | | |
|---|---|---|---|---|
| | | | 38. | ಕೊಲ್ಹಾರ |
| | | | 39. | ಆಲಮೇಲ* |
| ಕಲಬುರಗಿ | 17. | ಬೀದರ್ | 40. | ಚಿಟಗುಪ್ಪ |
| | | | 41. | ಹುಲಸೂರು |
| | | | 42. | ಕಮಲಾನಗರ |
| | 18. | ಬಳ್ಳಾರಿ | 43. | ಕುರುಗೋಡು |
| | | | 44. | ಕೊಟ್ಟೂರು |
| | | | 45. | ಕಂಪ್ಲಿ |
| | 19. | ಕಲಬುರಗಿ | 46. | ಕಾಳಗಿ |
| | | | 47. | ಕಮಲಾಪೂರ |
| | | | 48. | ಯಡ್ರಾಮಿ |
| | | | 49. | ಶಹಾಬಾದ್ |
| | 20. | ಯಾದಗಿರಿ | 50. | ಹುಣಸಗಿ |
| | | | 51. | ವಡಗೇರ |
| | | | 52. | ಗುರುಮಿಟ್ಕಲ್ |
| | 21. | ಕೊಪ್ಪಳ | 53. | ಕುಕನೂರು |
| | | | 54. | ಕನಕಗಿರಿ |
| | | | 55. | ಕಾರಟಗಿ |
| | 22. | ರಾಯಚೂರು | 56. | ಮಸ್ಕಿ |
| | | | 57. | ಸಿರವಾರ |

* 2019-20ನೇ ಸಾಲಿನಿಂದ ಅಸ್ತಿತ್ವಕ್ಕೆ ಬಂದಿರುವ ತಾಲ್ಲೂಕುಗಳು

**ಆಡಳಿತಾತ್ಮಕ ಅನುಮೋದನೆಯಾಗಿದ್ದು, ಅಧಿಸೂಚಿಸುವ ಪ್ರಕ್ರಿಯೆ ಚಾಲನೆಯಲ್ಲಿರುವ ತಾಲ್ಲೂಕುಗಳು**

| ವಿಭಾಗ | ಜಿಲ್ಲೆ | | ಹೊಸ ತಾಲ್ಲೂಕಿನ ಹೆಸರು | |
|---|---|---|---|---|
| ಬೆಂಗಳೂರು | 1. | ರಾಮನಗರ | 1. | ಹಾರೋಹಳ್ಳಿ |
| | 2. | ಚಿಕ್ಕಬಳ್ಳಾಪುರ | 2. | ಚೇಳೂರು |
| | | | 3. | ಮಂಚೇನಹಳ್ಳಿ |
| ಮೈಸೂರು | 3. | ಹಾಸನ | 4. | ಶಾಂತಿಗ್ರಾಮ |
| ಬೆಳಗಾವಿ | 4. | ಬೆಳಗಾವಿ | 5. | ಯರಗಟ್ಟಿ |
| | 5. | ಬಾಗಲಕೋಟೆ | 6. | ತೇರದಾಳ |
| ಕಲಬುರಗಿ | 6. | ರಾಯಚೂರು | 7. | ಅರಕೇರಾ |